## ನಾಟಕ........

ಚಿಕ್ಕಂದಿನಲ್ಲಿ ನನ್ನ ಹಳ್ಳಿಯಲ್ಲಿ, ತರುವಾಯ ವಿಜಾಪುರದಲ್ಲಿ, ಮುಂದೆ ಮಹಾತ್ಮಾಗಾಂಧಿಯವರ ಅಸಹಕಾರ ಚಳವಳಿಯ ಸಂಬಂಧವಾಗಿ ನಾನು ಅನೇಕ ಮತ್ತು ಅನೇಕ ವಸ್ತುಗಳ ಬಗ್ಗೆ ಹರಿಕೀರ್ತನ (ಹರಿಕಥೆ) ಗಳನ್ನು ಕೇಳಿದ್ದೇನೆ. ಆ ಅನುಭವವನ್ನು ನೆನೆದರೆ ಇಂದು ಕೂಡ ಆ ಕೀರ್ತನಕಾರರ, ಅವರ ಕಥನಶೈಲಿಯು, ಅವರ ಸಾಹಿತ್ಯಸಂಗ್ರಹದ ಮತ್ತು ಅವರ ಹಾವಭಾವಗಳ ಚಿತ್ರ ನನ್ನ ಕಣ್ಣೆದುರು ನಿಲ್ಲುವುದು.

ಇತ್ತೀಚೆಗೆ, ಎಂದರೆ 1971 ರಲ್ಲಿ, ನ್ಯಾಶನಲ್ ಬುಕ್ ಟ್ರಸ್ಟ್ ಆಫ್ ಇಂಡಿಯಾ ಎಂಬ ಸಂಸ್ಥೆಗೆ ಇಂಡಿಯನ್ ಥಿಯೇಟರ್ ಎಂಬ ಹೆಸರಿನಿಂದ ಇಂಗ್ಲಿಷಿನಲ್ಲಿ ನಾನು ಬರೆದುಕೊಟ್ಟ ಭಾರತೀಯ ನಾಟ್ಯಕಲೆಯ ಇತಿಹಾಸ ಗ್ರಂಥದಲ್ಲಿ 10 ನೆಯ ಶತಮಾನದಿಂದ 2-3 ಶತಮಾನಗಳವರೆಗೆ ಕೀರ್ತನ ಕಲೆಯೆ ನಮ್ಮ ನಾಟ್ಯಪರಂಪರೆಯನ್ನು ಉಳಿಸಿ ಬೆಳೆಸಿತು ಎಂದು ಬರೆದಿದ್ದೇನೆ.

ಕೀರ್ತನ ಕಲೆಯ ಪ್ರಭಾವ ನನ್ನ ಹೃದಯದಲ್ಲಿ ಎಷ್ಟು ಆಳವಾಗಿದೆ ಎಂಬುದನ್ನು ವಿವರಿಸಲು ಈ ಮಾತುಗಳನ್ನು ಇಲ್ಲಿ ಹೇಳುತ್ತಿದ್ದೇನೆ. ಆ ಪ್ರಭಾವದ ಒಂದು ಫಲವಾಗಿ ಈ ನಾಟಕವನ್ನು ವಾಚಕರ-ಪ್ರೇಕ್ಷಕರ-ಮುಂದೆ ಇಡುತ್ತಿದ್ದೇನೆ.

ಕೀರ್ತನಕಾರನ ಮುಖಾಂತರವಾಗಿಯೆ ನಾಟಕವನ್ನು ರೂಪಿಸಿದ್ದುದರಿಂದ ಪೌರಾಣಿಕ ಪಾತ್ರಗಳೂ, ಪೌರಾಣಿಕ ಸಂದರ್ಭಗಳೂ ಅನಿವಾರ್ಯವಾದುವು (ಇಂದಿನ ತರುಣರಿಗೆ ಆ ಸಾಹಿತ್ಯದ ಪರಿಚಯ ಎಷ್ಟರ ಮಟ್ಟಿಗಿದೆಯೋ ?). ನನ್ನ ಚಿಂತನಶೀಲ ಸ್ವಭಾವಕ್ಕಾಗಿ ತಾತ್ಕಾಲೀನ ಸಮಸ್ಯೆಗಳೂ ಅನಿವಾರ್ಯವಾಗಿವೆ. ಸಮಸ್ಯೆ ಮತ್ತು ವಿಚಾರಗಳಲ್ಲಿ ಮಾತ್ರ ತಾತ್ಕಾಲೀನತೆಯ ಸಂಪರ್ಕವಿದೆ ಎಂಬುದನ್ನು ರಂಗಸ್ಥಲ ಮತ್ತು ಪಾತ್ರಗಳ ಸಜ್ಜಿಕೆಯ ಸಂಬಂಧದಲ್ಲಿ ಲಕ್ಷ್ಯದಲ್ಲಿಡಬೇಕು.

—ಶ್ರೀರಂಗ

(ಸಮಗ್ರ ಮಂಥನದ ಮುನ್ನುಡಿಯಿಂದ)

Received with thanks.
S. Venkateshamurty
13/12/76.

## ರಂಗಸಂಪದ....

೧೯೭೧ ರಲ್ಲಿ ಜನ್ಮ ತಳೆದ 'ರಂಗಸಂಪದ' ಈವರೆಗೆ 'ಯಯಾತಿ', 'ಕದಡಿದ ನೀರು', 'ತ್ರಿಶಂಕು', 'ಅಂಧಯುಗ', 'ಜೈಸಿದ ನಾಯಕ', 'ಮತ್ತೆ ಮತ್ತೆ', 'ಆಮನಿ', 'ಏವಂ ಇಂದ್ರಜಿತ್', 'ಆಧೇ ಅಧೂರೆ', 'ಹಗ್ಗದ ಕೊನೆ', 'ಅಶ್ವಮೇಧ', 'ಕ್ರಾಂತಿ ಬಂತು ಕ್ರಾಂತಿ', ಟಿ. ಪ್ರಸನ್ನನ ಗೃಹ ಸ್ಥಾಶ್ರಮ', 'ಗಿಳಿಯು ಪಂಜರದೊಳಿಲ್ಲ', 'ನೀ ಕೊಡೆ ನಾ ಬಿಡೆ' 'ಸಂಗ್ಯಾ ಬಾಳ್ಯಾ'–ಇತ್ಯಾದಿ ನಾಟಕಗಳನ್ನು ರಂಗದ ಮೇಲೆ ತಂದು ಹವ್ಯಾಸಿ ರಂಗ ಭೂಮಿಯಲ್ಲಿ ತನ್ನದೇ ಆದ ವಿಶಿಷ್ಟ ಸ್ಥಾನವನ್ನು ಗಳಿಸಿಕೊಂಡಿದೆ. 'ಸಂಗ್ಯಾ ಬಾಳ್ಯಾ' ದ ಟಿ. ವಿ. ಪ್ರದರ್ಶನ (SITE ಕಾರ್ಯಕ್ರಮ) ರಂಗಸಂಪದ ಬೆಳೆಯುತ್ತಿರುವ ಮತ್ತೊಂದು ದಿಕ್ಕನ್ನು ಸೂಚಿಸುತ್ತದೆ.

ಜನರಲ್ಲಿ ನಾಟಕಾಭಿರುಚಿಯನ್ನು ಬೆಳೆಸುವ ಉದ್ದೇಶದಿಂದ 'ನೀವಿರು ವಲ್ಲೇ ನಾಟಕ ಪ್ರದರ್ಶನ' ಕಾರ್ಯಕ್ರಮವನ್ನು ರೂಪಿಸಿಕೊಂಡು ಬೆಂಗಳೂರಿನ ವಿವಿಧ ಬಡಾವಣೆಗಳಲ್ಲಿ ನಾಟಕ ಪ್ರದರ್ಶನ ಕೊಟ್ಟಿದ್ದೇವೆ ಮತ್ತು ಇದರಿಂದ ಕೈಸುಟ್ಟಿಕೊಂಡಿದ್ದೇವೆ, ಕೂಡ. ಹೀಗೆಯೇ ಇತರ ಹಲವಾರು ಯೋಜನೆಗಳು, ಕನಸುಗಳು ಇನ್ನೂ ಕಾರ್ಯಗತವಾಗಬೇಕಾಗಿದೆ. ಎಷ್ಟೇ ಅಡಚಣೆಗಳಿದ್ದರೂ ನಾವು ಮಾಡಬೇಕೆಂದ ಕೆಲಸಗಳಲ್ಲಿ ಪ್ರಾಮಾಣಿಕ ಪ್ರಯತ್ನವನ್ನಂತೂ ಮಾಡು ತ್ತಿದ್ದೇವೆ. ಕರ್ನಾಟಕದ ವಿವಿಧ ಕೇಂದ್ರಗಳಲ್ಲಿ ಪ್ರದರ್ಶನವಿತ್ತಿದ್ದೇವೆ. ಹಲವಾರು ಯುವ ನಿರ್ದೇಶಕರಿಗೆ, ನಾಟಕಕಾರರಿಗೆ, ಕಲಾವಿದರಿಗೆ ರಂಗ ಭೂಮಿಯಲ್ಲಿ ಪ್ರಥಮಾವಕಾಶ ನೀಡಿದ್ದೇವೆ. ನಮ್ಮ ಪ್ರಯತ್ನಗಳಲ್ಲಿ ಸೋಲುಗೆಲುವುಗಳೆರಡನ್ನೂ ಅನುಭವಿಸಿ, ಕನ್ನಡ ರಂಗಭೂಮಿಯ ಉನ್ನತ ಮಟ್ಟವನ್ನು ಉಳಿಸಬೇಕೆಂಬ ಜವಾಬ್ದಾರಿಯನ್ನರಿತು ಮುಂದುವರಿಯು ತ್ತಿದ್ದೇವೆ.

ಬೆಂಗಳೂರಿನಲ್ಲಿ ನಾಟಕ ಹವ್ಯಾಸಿಗಳಿಗೆ ಪ್ರದರ್ಶನ ನೀಡಲು ಇರುವ ಒಂದೇ ಕ್ಷೇತ್ರವಾದ ರವೀಂದ್ರ ಕಲಾಕ್ಷೇತ್ರದಲ್ಲಿ ನಾಟಕ ಪ್ರದರ್ಶಿಸಲು ಅಗತ್ಯ ವಾದ ಅನೇಕ ಅನುಕೂಲತೆಗಳನ್ನು ಕಲ್ಪಿಸುವಲ್ಲಿ 'ರಂಗಸಂಪದ' ಪ್ರಮುಖ ಪಾತ್ರವಹಿಸಿದೆ.

'ರಂಗಸಂಪದ'ಕ್ಕೆ ಯಾವುದೇ ವಿಧವಾದ ತಾತ್ವಿಕ commitment ಇಲ್ಲ. ಇರುವ ಒಂದೇ commitment ಎಂದರೆ ಹೊಸ ಹೊಸ ಪ್ರಯೋಗ ಗಳಿಂದ ರಂಗಭೂಮಿಯಲ್ಲಿ ಹೊಸ ಗಾಳಿ ಬೀಸುವಂತೆ ಮಾಡುವುದು.

೧೯೭೭ ರಲ್ಲಿ :

'ಮಹಾ ಪ್ರಸ್ಥಾನ'— ಮೂಲ: ಯಾ ಜೀನ್ ಐನೆಸ್ಕೊನ Exit the King
ಕನ್ನಡ ರೂಪಾಂತರ : ಎಂ. ಎಸ್. ಕೆ. ಪ್ರಭು.
ನಿರ್ದೇಶನ : ಎಚ್. ವಿ. ವೆಂಕಟಸುಬ್ಬಯ್ಯ
'ಅಸಹಾಯಕರು'—ಸತ್ಯೇಂದ್ರ, ನಿರ್ದೇಶನ : ಅನಿಲ್ ಕುಮಾರ್
'ಕಕೇಸಿಯನ್ ಚಾಕ್ ಸರ್ಕಲ್' —ಮೂಲ: ಬೆಟೋಲ್ಟ್ ಬ್ರೆಖ್ಟ್
ಕನ್ನಡಕ್ಕೆ : ಜಿ. ಎನ್. ರಂಗನಾಥರಾವ್
ನಿರ್ದೇಶನ : ನಾಗೇಶ್

ಮತ್ತು ಇತರ ನಾಟಕಗಳು.

## ನಾಟಕಕಾರ........

ಸುಮಾರು ಐವತ್ತು ವರ್ಷಗಳಿಂದಲೂ ನಾಟಕಗಳನ್ನು ಬರೆಯುತ್ತಿರುವ ಶ್ರೀರಂಗರು ಆಧುನಿಕ ಕನ್ನಡ ರಂಗಭೂಮಿಯ ಆಧ್ಯರು. ಕೈಲಾಸಂ ಅವರು ನಾಟಕಗಳನ್ನು ಬರೆಯುತ್ತಿದ್ದ ಕಾಲದಲ್ಲಿಯೇ ನಾಟಕ ಬರೆಯಲು ಪ್ರಾರಂಭ ಇವರು ನಿಜವಾದ ಅರ್ಥದಲ್ಲಿ ಈಗಲೂ ಜೀವಂತವಾಗಿಯೇ ಇದ್ದಾರೆ. ಇವರ ನಾಟಕಗಳಲ್ಲಿ ಬರುವ ಪಾತ್ರಗಳು, ಭಾಷೆ, ಉತ್ತರ ಕರ್ನಾಟಕದ ನೆಲದಿಂದ ಮೂಡಿಬಂದುವು. ಯಾರ ವಿರೋಧವನ್ನೂ ಲೆಕ್ಕಿಸದೆ ತಮಗನ್ನಿಸಿದ್ದನ್ನ ನಿರ್ಭಯವಾಗಿ ನಾಟಕದ ಮೂಲಕ ಹೇಳುತ್ತಾ ಬಂದಿದ್ದಾರೆ. ಸಾಮಾಜಿಕ ಸಮಸ್ಯೆಗಳನ್ನು ಕುರಿತು ಬರೆದಾಗಲೂ ಅವು ಸಮಸ್ಯೆಗಳನ್ನು ವಿಶ್ಲೇಷಿಸುವ ಥೀಸಿಸ್‌ಗಳಾಗದೆ ನಾಟಕಗಳಾಗಿವೆ ಎನ್ನುವುದರಿಂದಲೇ ಅವರು ಈಗಲೂ ಕನ್ನಡದ ಅತ್ಯಂತ ಪ್ರಮುಖ ನಾಟಕಕಾರರಲ್ಲೊಬ್ಬರಾಗಿ ಉಳಿದು ಬಂದಿದ್ದಾರೆ.

ನೀಳಕಾಯದ ಶ್ರೀರಂಗರು ಜಿಗುಟಿನ ವ್ಯಕ್ತಿ. ತತ್ವಕ್ಕೆ ಅಂಟಿಕೊಂಡ ಜಿಗುಟಿನಿಂದಾಗಿಯೇ ಯಾವ ಕೆಲಸದಲ್ಲಿಯೂ ಅವರು ದೀರ್ಘಕಾಲ ಇರಲು ಸಾಧ್ಯವಾಗಲಿಲ್ಲ. ಎಪ್ಪತ್ತೆರಡರ ಈ ಇಳಿವಯಸ್ಸಿನಲ್ಲಿಯೂ ಆ ಸೊಗಡು ಮಾಯವಾಗದಿರುವುದು, ಅದು ಅವರ ನಾಟಕಗಳಲ್ಲಿ ಅಭಿವ್ಯಕ್ತವಾಗುತ್ತಿರುವುದು ಮಹತ್ವದ ಅಂಶ.

'ಹರಿಜನ್ವಾರ' 'ಸಂಧ್ಯಾಕಾಲ', 'ಕೇಳು ಜನಮೇಜಯ', 'ಕತ್ತಲೆ ಬೆಳಕು'—ಮುಂತಾದ ನಾಟಕಗಳು ಅವರ ಬರವಣಿಗೆಯ ವಿವಿಧ ಘಟ್ಟಗಳನ್ನು ಸೂಚಿಸುತ್ತಿವೆ.

ಇವರ ನಾಟಕಗಳು ಹಿಂದಿ, ಮರಾಠಿ ಮತ್ತಿತರ ಭಾಷೆಗಳಿಗೆ ಅನುವಾದವಾಗಿದ್ದು ಅಖಿಲ ಭಾರತ ಮಟ್ಟದ ಕೆಲವೇ ಪ್ರಮುಖ ನಾಟಕಕಾರರಲ್ಲಿ ಒಬ್ಬರೆನಿಸಿಕೊಂಡಿದ್ದಾರೆ.

ಬಿ. ವಿ. ವೈಕುಂಠರಾಜು

## ಮಹಾಪ್ರಸ್ಥಾನ

**ಅಸಂಗತ ರಂಗಭೂಮಿ :** ಈ ಪ್ರಪಂಚದಲ್ಲಿ ಒಳಿಯದು–ಕೆಟ್ಟದ್ದು, ನೀತಿ–ಅನೀತಿ, ನ್ಯಾಯ–ಅನ್ಯಾಯ ಮುಂತಾದ ಯಾವುದೇ ಭೇದ ಭಾವವಿಲ್ಲ. ಪ್ರತಿಯೊಂದೂ ತಟಸ್ಥವಾಗಿರುತ್ತವೆ. ಪ್ರತಿಯೊಂದು ವಸ್ತು ಸಂಗತಿಗಳೂ ಅರ್ಥಹೀನವಾಗಿರುತ್ತವೆ. ಆದರೆ ಎಲ್ಲಕ್ಕೂ ಅರ್ಥ ಕಲ್ಪನೆ ಮಾಡಿ ಪ್ರತಿಯೊಂದು ವಸ್ತುವನ್ನೂ, ಸಂಗತಿಯನ್ನೂ ಬೌದ್ಧಿಕವಾಗಿ ಅಳೆದು ವಿಚಾರವಾದಕ್ಕೆ ಒಗ್ಗಿಸುವುದು ಮನುಷ್ಯನ ಸ್ವಭಾವ. ನಾವು ಯಾವುದೇ ಒಂದು ಸಂಗತಿಯನ್ನು 'ಅನೀತಿಯುತ' ಎಂದು ವರ್ಣಿಸಿದಾಗ, ಅಲ್ಲಿನ ಕ್ರಿಯೆಯೇ ಅನೀತಿಯುತವೆಂದು ಅರ್ಥವಲ್ಲ, ನಾವು ಆ ಸಂಗತಿಯನ್ನು ಆ ಹೆಸರಿನಿಂದ ಕರೆಯಲು ಕಲಿತಿದ್ದೇವೆಂದು ಮಾತ್ರ ತಾತ್ಪರ್ಯ. ಬದುಕಿನ ಪರಮ ಸತ್ಯವೆಂದರೆ ಅದರ ಅಸ್ತಾವ್ಯಸ್ಥತೆ, ಅಸ್ಪಷ್ಟತೆ, ವಿಪರ್ಯಾಸಗಳ ಗೊಂದಲ. ಇವೆಲ್ಲಾ ತರ್ಕ, ವ್ಯವಸ್ಥೆ ಮತ್ತು ಖಚಿತತೆಗಳಿಂದ ದೂರವಾದದ್ದು. ಇಂತಹ ಪರಿಸರದಲ್ಲಿ ಪ್ರತಿಯೊಬ್ಬನೂ ತನ್ನ ಬದುಕಿನ ಸೂತ್ರಗಳನ್ನು, ನಿಯಮಗಳನ್ನು ತಾನೇ ರೂಪಿಸಿಕೊಳ್ಳಬೇಕು. ಹಾಗೆ ರೂಪಿಸಿಕೊಂಡ ಮೌಲ್ಯಗಳು ಇತರ ಪರಂಪರಾಗತ, ವೈಚಾರಿಕ, ವೈಜ್ಞಾನಿಕ, ಧಾರ್ಮಿಕ ಮೌಲ್ಯಗಳಷ್ಟೇ ಅಸಂಗತವಾದುದೆಂಬುದನ್ನು ಮಾತ್ರ ಮರೆಯಬಾರದು.

**ಯೂಜಿನ್ ಐನೆಸ್ಕೊ** (೧೯೧೨—): ೧೯೫೦ರಲ್ಲಿ Balp Soprano ಎಂಬ antiplayಯ ಪ್ರದರ್ಶನದಿಂದ ಪ್ರಸಿದ್ಧಿಗೆ ಬಂದು, ನಂತರ ಹಲವಾರು ವರ್ಷಗಳ ಕಾಲ ಯೂರೋಪಿನ ರಂಗಭೂಮಿಯಲ್ಲಿ ಅಸಾಧಾರಣ ಕ್ರಾಂತಿಗೆ ಕಾರಣನಾದ ನಾಟಕಕಾರ. ಮೂಲತಃ ರೊಮೇನಿಯನ್ ಆದ ಈತ ದ್ವಿತೀಯ ಮಹಾಯುದ್ಧಾನಂತರ ಫ್ರಾನ್ಸಿನಲ್ಲಿ ನೆಲೆಸಿ ಫ್ರೆಂಚ್ ಭಾಷೆಯಲ್ಲಿ ನಾಟಕಗಳನ್ನು ಬರೆದಿದ್ದಾನೆ. ಈತನ ನಾಟಕಗಳೆಲ್ಲಾ ಹೊಗಳಿಕೆ, ತೆಗಳಿಕೆ ಎರಡಕ್ಕೂ ಪಾತ್ರವಾಗಿವೆ. ತನ್ನ ನಾಟಕಗಳ ಬಗ್ಗೆ ಬಂದ ಕಟು ವಿಮರ್ಶೆಗಳಿಗೆ ಈತ ಯುದ್ಧೋತ್ಸಾಹದಿಂದ ಪ್ರತ್ಯುತ್ತರ ಕೊಟ್ಟಿದ್ದಾನೆ. ವಾದ ವಿವಾದಗಳೆಂದರೆ ಈತನಿಗೆ ಎಲ್ಲಿಲ್ಲದ ಸಡಗರ, ಉತ್ಸಾಹ, ಚುರುಕುತನ. 'ವಿವಾದಾಸ್ಪದವಾಗದ ವಿಮರ್ಶೆ ವಿಮರ್ಶೆಯೇ ಅಲ್ಲ' ಎಂದು ಈತನ ಸ್ವಂತ ಅಭಿಪ್ರಾಯ.

ಮನುಷ್ಯನ ಭಾಷೆ, ಸಾಧನೆ ಮತ್ತು ಬದುಕು–ಎಲ್ಲಾ ಅರ್ಥಹೀನ, ಉದ್ದೇಶರಹಿತ ಮತ್ತು ಅಸಂಗತ ಎಂಬ ತತ್ವ ಈತನ ಎಲ್ಲಾ ನಾಟಕಗಳಲ್ಲೂ ಪ್ರಮುಖವಾಗಿ ಪ್ರತಿಪಾದಿತವಾಗಿದೆ. ಬದುಕಿನ ಅತಿಸಣ್ಣ ಸಂಗತಿಗಳಲ್ಲೂ, ಉಪಹಾಸಪೂರ್ಣ ಸನ್ನಿವೇಶಗಳಲ್ಲೂ ಈತನಿಗೆ ಮನುಷ್ಯನ ಮನಸ್ಸನ್ನು

ಸದಾ ಆವರಿಸಿರುವ ಸಾವಿನ ಹೆದರಿಕೆಯ ಛಾಯೆಯೇ ಕಾಣುತ್ತದೆ. ಆಳವಾಗಿ ಬೇರು ಬಿಟ್ಟ ಯಥಾರ್ಥವಾದದ ಪರಂಪರೆಯನ್ನು ಕಡೆಗಣಿಸಿ, ಬದುಕನ್ನು ವಾಸ್ತವತೆಯನ್ನು ಅತಿ ವಾಸ್ತವತಾ ದೃಷ್ಟಿಯಿಂದ ಹೊಸದಾಗಿ ಕಂಡು ಅತ್ಯಂತ ಸಾಧಾರಣ ಸಂಗತಿಯಲ್ಲಿ ಕೂಡ ಎಂತಹ ದಿಗ್ಭ್ರಮೆಗೊಳಿಸುವ ವಿಲಕ್ಷಣತೆಯಿಂದೆ ಎಂಬುದನ್ನು ಈತ ನಾಟಕಗಳಲ್ಲಿ ಪರಿಣಾಮಕಾರಿಯಾಗಿ ನಿರೂಪಿಸಿದ್ದಾನೆ. ತನ್ನ ಸಮಾಜವನ್ನು ಸಮಾಜ ವ್ಯವಸ್ಥೆಯನ್ನು ಅವ್ಯಾಹತವಾಗಿ ಗೇಲಿ ಮಾಡುತ್ತಾ ಬಂದ ಐನೆಸ್ಕೊ ೧೯೭೦ ರಲ್ಲಿ Academic Francaise ನ ಸದಸ್ಯತ್ವಕ್ಕೆ ಉಮೇದುವಾರನಾಗಿ ನಿಂತು ಆರಿಸಿ ಬಂದ.

ಮಹಾ ಪ್ರಸ್ಥಾನ: Exit the King ನಾಟಕದ ಕನ್ನಡ ರೂಪಾಂತರ.

ರಾಜಾ ಅಮರಸಿಂಹನಿಗೆ ವಯಸ್ಸಾಗುತ್ತಿದೆ. ಸಾವಿರಾರು ವರ್ಷಗಳ ಅವನ ಆಳ್ವಿಕೆಯಲ್ಲಿ ದೇಶದ ಪರಿಸ್ಥಿತಿ ಕುಲಗೆಟ್ಟು ಹೋಗಿದೆ. ಆದರೂ ಅವನು ಏನೂ ಮಾಡಲಾಗುತ್ತಿಲ್ಲ. ಅವನ ಅವಸಾನ ಸಮೀಪಿಸಿದೆ. ತನ್ನ ರಾಜ್ಯವನ್ನು, ತನ್ನ ಪ್ರಜೆಗಳನ್ನು, ತನ್ನ ಸಂಸಾರವನ್ನು ಬಿಟ್ಟು 'ಹೋಗಲು' ಅವನು ಮನಸ್ಸು ಮಾಡಬೇಕು. ಆದರೆ, ಇನ್ನೂ ನೂರಾರು ವರ್ಷಗಳಾದರೂ ಬದುಕಿರಬೇಕೆಂದು ಅವನ ಬಯಕೆ.... ಈ ಮಧ್ಯೆ ಅವನ ಅರಮನೆಯ ಗೋಡೆಗಳು ಬಿರುಕು ಬಿಡುತ್ತಿವೆ, ರಾಜ್ಯದಲ್ಲಿ ಭೂಕಂಪಗಳಾಗುತ್ತಿವೆ, ಎಲ್ಲೆಲ್ಲೂ ಕ್ಷಾಮ ತಾಂಡವವಾಡುತ್ತಿದೆ. ಆಕಾಶದಲ್ಲಿ ಗ್ರಹಗಳು ಒಂದಕ್ಕೊಂದು ಢಿಕ್ಕಿ ಹೊಡೆದು ಉತ್ಪಾತಗಳಾಗುತ್ತಿವೆ. ಈ ಎಲ್ಲಾ ಶಕುನಗಳು ಅವನ ಅವಸಾನವನ್ನೇ ಸೂಚಿಸುತ್ತಿವೆ. ಇನ್ನೂ ಬದುಕಿರಬೇಕೆಂಬ ಅವನ ಅಸ್ವಾಭಾವಿಕ ಬಯಕೆಗೆ ಅವನ ಕಿರಿಯ ರಾಣಿಯಾದ ಮೋಹಿನೀದೇವಿ ತನ್ನ ಪ್ರೀತಿ, ವಿಶ್ವಾಸ, ಅನುಕಂಪ, ಸೌಂದರ್ಯಗಳಿಂದ ಇಂಬುಗೊಡುತ್ತಾ, ಅನಿವಾರ್ಯವಾದ ಅಂತಿಮ ಕ್ಷಣವನ್ನೂ ಆದಷ್ಟು ಮುಂದೆ ಹಾಕುವ ಸಾಹಸ ಮಾಡುತ್ತಾಳೆ. ಆದರೆ, ಸನ್ನಿವೇಶದ ಕಟು ವಾಸ್ತವತೆಯನ್ನು ಮನಗಂಡು, ಅದರ ಎದುರು ಎಲ್ಲಾ ಭಾವನಾತ್ಮಕ ಸಾಹಸಗಳು ವ್ಯರ್ಥವೆಂದು, ರಾಜನಿಗೆ ಅರಿವನ್ನುಂಟು ಮಾಡಿ, ಸಾವನ್ನು ಎದುರಿಸಲು ಅಗತ್ಯವಾದ ಮಾನಸಿಕ ಸಿದ್ಧತೆಯನ್ನು ಹಿರಿಯ ರಾಣಿ ಸತ್ಯವತಿ ಅವನಲ್ಲಿ ಉಂಟುಮಾಡುತ್ತಾಳೆ. ಅಮರಸಿಂಹನ ಜಗತ್ತಿನಿಂದ ಒಬ್ಬೊಬ್ಬರಾಗಿ ಕಣ್ಮರೆಯಾಗುತ್ತಾರೆ. ಅವನ ಪಾಲಿಗೆ ಯಾರೂ ಉಳಿಯದೆ ಒಬ್ಬಂಟಿಯಾಗುತ್ತಾನೆ. ಅವನ ಇಂದ್ರಿಯಗಳು ಕೊನೆಗೆ ನಿಷ್ಕ್ರಿಯವಾದಾಗ, ಅರಮನೆ ಸಿಂಹಾಸನಗಳೊಂದಿಗೆ ರಾಜನೂ ರಂಗದಿಂದ ಅದೃಶ್ಯನಾಗುತ್ತಾನೆ.

## ಕಕೇಸಿಯನ್ ಚಾಕ್‌ಸರ್ಕಲ್

ವಿಶ್ವ ರಂಗಭೂಮಿಯಲ್ಲಿ ಶೇಕ್ಸ್‌ಪಿಯರನಷ್ಟೇ ಅದ್ವಿತೀಯವಾದ ವ್ಯಕ್ತಿ ಬರ್ಟೋಲ್ಟ್ ಬ್ರೆಖ್ಟ್. ರಂಗಭೂಮಿಯನ್ನು ಕೇವಲ ಕಲಾತ್ಮಕ ಅಭಿವ್ಯಕ್ತಿಯ ವೇದಿಕೆ ಎಂಬ ಸೀಮಿತ ಅರ್ಥದಲ್ಲಿ ಪರಿಗಣಿಸದೇ ಅದನ್ನು ಜನಜೀವನದ ಆಶೋತ್ತರಗಳು ಆರ್ಥಿಕ-ಸಾಮಾಜಿಕ ಮತ್ತು ರಾಜಕೀಯ ಸಮಸ್ಯೆಗಳನ್ನು ಪ್ರತಿಬಿಂಬಿಸುವ ಸಾಧನವನ್ನಾಗಿ ಮಾಡಿಕೊಂಡ ಕೀರ್ತಿ ಬ್ರೆಖ್ಟನದು. ಅಂತೆಯೇ ನಾಟಕವನ್ನು ಮನೋರಂಜನೆಯ ಆಯಾಮದಿಂದ ಅರ್ಥ, ಕ್ರಿಯೆ ಮತ್ತು ಬದಲಾವಣೆಯ ಸಾಧ್ಯತೆಯೆಂಬ ಮತ್ತೊಂದು ಆಯಾಮಕ್ಕೆ ಎಳೆದದ್ದು ಹಾಗೂ ಪ್ರೇಕ್ಷಕರಲ್ಲಿನ ವಿಮರ್ಶನ ಸಾಮರ್ಥ್ಯವನ್ನು ಉದ್ದೀಪನಗೊಳಿಸುವುದಕ್ಕಾಗಿ ಹೊಸ ತಂತ್ರ ರೂಪಿಸಿದ್ದು ಬ್ರೆಖ್ಟನ ವೈಶಿಷ್ಟ್ಯ. ಅಂದರೆ ಬ್ರೆಖ್ಟನನ್ನು ವಾಮಪಂಥೀಯ ಎಂದು ಲೇಬಲ್ ಮಾಡುವುದು ತಪ್ಪಾಗುತ್ತದೆ. ವಾಮಪಂಥವತ್ತ ಒಲವು ಅವನ ನಾಟಕಗಳಲ್ಲಿ ಕಾಣಬಹುದಾದರೂ ವ್ಯಾಪಕ ಅರ್ಥದಲ್ಲಿ ಬ್ರೆಖ್ಟ್ ಮಾನವತಾವಾದಿ. ಹಿಟ್ಲರನ ಕಾಲದಲ್ಲಿ ಗಡೀಪಾರಿಗೊಳಗಾಗಿ ಯುದ್ಧ ಮುಗಿದ ನಂತರ ಜರ್ಮನಿಗೆ ಹಿಂದಿರುಗಿದ ಬ್ರೆಖ್ಟ್ ಮಾನವೀಯತೆ ಮೇಲೆ ನಡೆದ ಫ್ಯಾಸಿಸ್ಟ್ ಶಕ್ತಿಗಳ ದೌರ್ಜನ್ಯಕಂಡು ಕೆರಳಿದ. ಅಧಿಕಾರ ಶಾಹಿಯ ದೌರ್ಜನ್ಯದ ವಿರುದ್ಧ ಜನರ ಕಣ್ಣು ತೆರೆಯಿಸಲು ಫ್ಯಾಸಿಸ್ಟ್ ಶಕ್ತಿಗಳನ್ನು ದಮನಗೊಳಿಸಲು ತನ್ನ ಲೇಖನಿಯನ್ನು ಮೀಸಲಿಟ್ಟ. ಅವನ ನಾಟಕಗಳಲ್ಲಿ ಫ್ಯಾಸಿಸ್ಟ್ ಶಕ್ತಿಗಳನ್ನೂ ಅದನ್ನು ಮೆಟ್ಟಿ ನಿಂತು ಬದುಕಿಯುಸುವ ಮಾನವೀಯ ದನಿಯನ್ನೂ ಕೇಳಬಹುದಾಗಿದೆ.

ಕಕೇಸಿಯನ್ ಚಾಕ್ ಸರ್ಕಲ್, ತ್ರಿಪೆನ್ನಿ ಆಪೇರ, ಮದರ್ ಕರೇಜ್, ಮದರ್, ದಿ ಗುಡ್ ವುಮೆನ್ ಆಫ್ ಸೆಷುವಾನ್–ಬ್ರೆಖ್ಟನ ಮಹತ್ವದ ನಾಟಕಗಳೆಂದು ಹೆಸರಾದವು. ಕಕೇಸಿಯನ್ ಚಾಕ್ ಸರ್ಕಲ್ ಕಥಾ ಪ್ರಧಾನವಾದ ನಾಟಕ. ಇಲ್ಲಿ ಆಸ್ತಿ ಭೋಗದ ಹಕ್ಕಿನ ಪ್ರಶ್ನೆಯಿದೆ; ತಾಯಿ–ಮಗುವಿನ ಪ್ರೀತಿ ಸಂಬಂಧಗಳನ್ನು ಪರೀಕ್ಷೆಗೊಡ್ಡಿರುವ ತೊಡಕಿದೆ. ಗಂಡು ಹೆಣ್ಣಿನ ಪ್ರೀತಿಯಿದೆ; ಇವೆಲ್ಲವನ್ನೂ ಅಣಕಿಸಿ ನೋಡುವಂಥ ನ್ಯಾಯ ವಿತರಣೆಯ ವೈಖರಿ ನಾಟಕದ ಉತ್ತರಾರ್ಧದಲ್ಲಿ ತಾನೇತಾನಾಗಿ ಮೆರೆದಿದೆ. ಎರಡು ರಕ್ತಕ್ರಾಂತಿಗಳ ನಡುವೆ ನಡೆಯುವ ಈ ನಾಟಕದುದ್ದಕ್ಕೂ ಮಿಡಿಯುವುದು ಮಾನವ ಸಹಜ ಬದುಕಿನ ನಾಡಿ, ಕೇಳುವುದು ಮಾನವೀಯ ದನಿ. ಮೊದಲ ಅರ್ಧದಲ್ಲಿ ಪ್ರಾಣ ಉಳಿಸಿಕೊಳ್ಳಲು ನೀಚಳಾದ ತಾಯಿ ಬಿಟ್ಟು ಹೋದ ರಾಜ ಮನೆತನದ ಕೂಸನ್ನು ಉಳಿಸಿ-ಬೆಳೆಸುವ ಕತೆಯಿದ್ದರೆ ದ್ವಿತಿಯಾರ್ಧದಲ್ಲಿ ಹಕ್ಕು ಮತ್ತು ನ್ಯಾಯ ವಿತರಣೆಯ ಕತೆಯಿದ್ದು ಇಡೀ ನಾಟಕ ಜೀವನದ ಒಂದು ಮಹಾನ್ ನೋಟವಾಗಿದೆ. "ನಾನು ಸ್ವೀಕರಿಸುವೆ" ಎಂದು ಲಂಚಕ್ಕಾಗಿ ಕೈಯೊಡ್ಡುವ ನ್ಯಾಯಾಧೀಶ ಈ ನಾಟಕದ ಒಂದು ಅದ್ಭುತ ಪಾತ್ರ. ಶ್ರೀಮಂತರಿಂದ ಕಸಿದುಕೊಂಡು ಬಡವರಿಗೆ ಹಂಚುವ ಇವನು ನ್ಯಾಯ ನೀಡುವ ವೈಖರಿ ದಂಗು ಬಡಿಸುವಂಥಾದ್ದು. ನಾಟಕದಲ್ಲಿ ಎಂದೆಂದಿಗೂ ಮರೆಯದಂತಹ ಪಾತ್ರ ನ್ಯಾಯಾಧೀಶನದು. ತಾಯ್ತನದ ಸುಗುಣವತಿಯರಲ್ಲಿ ಮಕ್ಕಳ ಭವಿಷ್ಯವನ್ನೂ, ನೆಲಕ್ಕೆ ನೀರುಣಿಸುವ, ಉಳುವವರಲ್ಲಿ ಭೂಮಿಯ ಹಿತವನ್ನೂ, ದವಸ, ಧಾನ್ಯಗಳ ಸಿರಿಯನ್ನೂ ಕಾಣುವ "ಕಕೇಸಿಯನ್ ಚಾಕ್‌ಸರ್ಕಲ್" ಜಗತ್ತಿನ ಶ್ರೇಷ್ಠ ನಾಟಕಗಳ ಪಂಕ್ತಿಯಲ್ಲಿ ನಿಲ್ಲುವಂಥಾದ್ದು.

## ಹೆಚ್. ವಿ. ವೆಂಕಟಸುಬ್ಬಯ್ಯ

ತೆಳ್ಳಗೆ ಬೆಳ್ಳಗೆ ಎತ್ತರದ ವ್ಯಕ್ತಿ ಸುಬ್ಬಣ್ಣ, ಹೌದು. ಅವರು ಈ ಹೆಸರಿನಲ್ಲೇ ಹೆಚ್ಚು ಪರಿಚಯ. ಕನ್ನಡ ರಂಗಭೂಮಿ ಕಳೆದ ದಶಕದಲ್ಲಿ ಹೊಸ ತಿರುವನ್ನು ತೆಗೆದು ಕೊಳ್ಳುವುದಕ್ಕೂ ಮೊದಲು, ಕಲಾಕ್ಷೇತ್ರದಲ್ಲಿ ಕನ್ನಡ ನಾಟಕ ನೆಲೆ ಪಡೆಯುವುದಕ್ಕೂ ಮೊದಲು ಸಾಹಿತ್ಯ ಪರಿಷತ್ತಿನ ಚಿಕ್ಕ ರಂಗದ ಮೇಲೆ ಹಲವಾರು ಕಸರತ್ತು ಮಾಡಿದರು ಸುಬ್ಬಣ್ಣ. ಕಾರ್ನಾಡರ ಯಯಾತಿಗೆ, ಲಂಕೇಶರ ನನ್ನ ತಂಗಿಗೊಂದು ಗಂಡು ಕೊಡಿಗೆ, ಶ್ರೀರಂಗರ ಕೇಳು ಜನಮೇಜಯಕ್ಕೆ ಪರಿಷತ್ತಿನ ರಂಗಮಂದಿರದಲ್ಲೇ ಪರಿಣಾಮಕಾರಿಯಾದ ರಂಗಸಜ್ಜಿಕೆ ಮತ್ತು ಬೆಳಕಿನ ವ್ಯವಸ್ಥೆ ಮಾಡಿದ್ದವರು ಸುಬ್ಬಣ್ಣ.

ನಾಟ್ಯಸಂಘ ಹೆಚ್ಚು ಚಟುವಟಿಕೆಯಿಂದಿದ್ದ ಸಮಯದಲ್ಲಿ ಸುಬ್ಬಣ್ಣ ಬಹಳ ದುಡಿದವರು. ಅದು ಜಡವಾದಾಗಲೆಲ್ಲಾ ನೊಂದವರು.



ಕನ್ನಡ ನಾಟಕ ಕಲಾಕ್ಷೇತ್ರದ ಮೆಟ್ಟಲು ಹತ್ತಿದ ಮೇಲಂತೂ ಇವರ ಪಾತ್ರ ಹಲವು ಹತ್ತು ನಾಟಕಗಳಲ್ಲಿ ಮೆರಗು ಕಂಡಿತು. ರಂಗ ಸಜ್ಜಿಕೆಯ ಕೆಲಸದಲ್ಲಾಗಲಿ ದೀಪದ ವ್ಯವಸ್ಥೆಯಲ್ಲಾಗಲಿ ಬಹಳ ಲೆಖ್ಖ

ಚಾರವಾಗಿ, ಶಾಸ್ತ್ರೀಯವಾಗಿ ಕೆಲಸಮಾಡುವ ಪರಿಪಾಠ. ಯಾವುದರಲ್ಲೂ ಕಾಂಪ್ರಮೈಸ್ ಮಾಡಿಕೊಳ್ಳದ ಹಟ.

ಇವರ ಕೆಲಸ ಕಂಡು ಮೆಚ್ಚಿ ಬೆನ್ನು ತಟ್ಟಿದರೂ ಇವರಿಗೆ ಮಾತ್ರ ಅಳುಕು, ಅತೃಪ್ತಿ ಇನ್ನೂ ಚೆನ್ನಾಗಿ ಮಾಡಬಹುದಿತ್ತಲ್ಲ ಎಂದು. ಕೇವಲ ರಂಗಸಜ್ಜಿಕೆ ಬೆಳಕಿನ ವ್ಯವಸ್ಥೆಗಳಿಗಷ್ಟೇ ಸೀಮಿತವಾಗಿಲ್ಲ ಇವರ ಕಾರ್ಯ ವ್ಯಾಪ್ತಿ. ಮೇಕಪ್, ಮಾಡ್ಲಿಂಗ್, ಕಾಸ್ಟ್ಯೂಮ್ಸ್, ಪಬ್ಲಿಸಿಟಿ, ಆಕ್ಟಿಂಗ್ ಹೀಗೆ ಹಲವಾರು.

ಇನ್ನು ನಾಟಕ ನಿರ್ದೇಶನದ ಪ್ರಥಮ ಪ್ರಯತ್ನದಲ್ಲೆ ಒಳ್ಳೆಯ ಡಿವಿಡೆಂಡ್ಸ್ ಪಡೆದರು. ಈಗಾಗಲೆ ಇವರ ಸಮುಗ್ರ ಮಂಥನ ರಾಜ್ಯದ ಹಲವಾರು ನಗರಗಳಲ್ಲಿ ಪ್ರದರ್ಶನಗೊಂಡು ಉತ್ತಮ ನಿದೇಶಕರಾಗುವ ಎಲ್ಲಸೂಚನೆಗಳನ್ನು ತೋರಿದ್ದಾರೆ.

ರಂಗಭೂಮಿಯ ಬಹಳಷ್ಟು ಜನ ಸಿನೆಮಾರಂಗದ ಕಡೆ ವಾಲಿದ್ದನ್ನು ಇತ್ತೀಚಿನ ವರ್ಷಗಳಲ್ಲಿ ಕಾಣುತ್ತಿದ್ದೇವೆ. ಸುಬ್ಬಣ್ಣ ಇದಕ್ಕೆ ಹೊರತೇನೂ ಅಲ್ಲ. ಮಯೂರ ತಂಡದ ಗೆಳೆಯರನ್ನು ಕೂಡಿ "ಕಂಕಣ" ಚಿತ್ರ ತಯಾರಿಕೆ ಯಲ್ಲಿ ಸಕ್ರೀಯವಾಗಿ ಪಾಲ್ಗೊಂಡರು. ವ್ಯವಸ್ಥಿತ ಸಂಘಟನೆಯಲ್ಲಿ ವಿಶ್ವಾಸವಿರುವ ಕಡೆಯಲ್ಲಿ ಸುಬ್ಬಣ್ಣ ಕೆಲಸಕ್ಕೆ ಸಿದ್ಧ.

ಓದಿದ್ದು Sound Engineering ಉದ್ಯೋಗ Electroncis ಹವ್ಯಾಸ Theatre. ಇವರ ಹವ್ಯಾಸಕ್ಕೆ ಜೊತೆಗೂಡಿದ ಮಡದಿ. ಈಗಾಗಲೆ ನಾಟಕದಲ್ಲಿ ಪ್ರತಿಭೆಯನ್ನು ಮೂಡಿಸಿಕೊಂಡಿರುವ ಮುದ್ದು ಮಗಳು. ಈ ವಾತಾವರಣದಲ್ಲಿ ಸುಬ್ಬಣ್ಣರಿಂದ ರಂಗಭೂಮಿ ಹೆಚ್ಚಿನದನ್ನು ನಿರೀಕ್ಷಿಸುವುದು ಅಚ್ಚರಿಯಲ್ಲ.

ಅಯನೆಸ್ಕೋನ Exit the King ಇವರ ಮುಂದಿನ ಪ್ರಯೋಗ. ಸುಬ್ಬಣ್ಣರ ಈ ಮಹಾ ಪ್ರಸ್ಥಾನದ ಪ್ರಯೋಗ ಇವರ Great Entry ಆಗಲಿ ಎಂಬ ಹಾರೈಕೆ.

## ರಂಗದ ಮೇಲೆ

| | |
|---|---|
| ಕೀರ್ತನಕಾರ : | ರಾಮಚಂದ್ರಾಚಾರ್ |
| ಪಿತಾಮಹ : | ನರಸಿಂಹಾಚಾರ್ |
| ವಿಠಲ : | ಕೃಷ್ಣಮೂರ್ತಿ |
| ಪಶುಪತಿ : | ಸತ್ಯನಾರಾಯಣ |
| ಇಂದ್ರ : | ವಸಂತಕುಮಾರ ಶೆಣೈ |
| ಲಕ್ಷ್ಮೀ : | ಶಾಂತಾ ದೇವುಡು |
| ಸರಸ್ವತೀ : | ಶಾರದಾ ವೆಂಕಟಸುಬ್ಬಯ್ಯ |
| ಆ. ಕುಬೇರ : | ಗೋಪಾಲಕೃಷ್ಣ |
| ವ್ಯಕ್ತಿ : | ಗುಂಡಣ್ಣ / ರಾಮಕೃಷ್ಣ |
| ಸಮವಸ್ತ್ರಧಾರಿ<br>ದಿಕ್ಪಾಲಕರು<br>ಜನಸಮೂಹ | ರಂಗಸಂಪದ ಕಲಾವಿದರು |
| ಮೇಳ : | ರಾಮಕೃಷ್ಣ, ನಾರಾಯಣಸ್ವಾಮಿ |

## ರಂಗದ ಹಿಂದೆ

| | |
|---|---|
| ಬೆಳಕು ಮತ್ತು<br>ರಂಗಸಜ್ಜಿಕೆ : | ಸುಬ್ರಮಣ್ಯ<br>ಲೋಕೇಶ್<br>ಶಿವಶಂಕರ್<br>ಗುಂಡಣ್ಣ<br>ಬಿ. ಎಮ್. ನಾಗೇಶ್<br>ರುದ್ರಮೂರ್ತಿ<br>ರಾಮಕೃಷ್ಣ<br>ನಾಗೇಶರಾವ್, ದತ್ತಾತ್ರೇಯ, ಮಂಜುನಾಥ್ |
| ರಂಗಸಲಕರಣೆ<br>ಉಡುಪು ಮತ್ತು<br>ಆಭರಣ | ರಾಮಚಂದ್ರಯ್ಯ<br>ದಾನಿ |
| ಧ್ವನಿ : | ಅಬ್ಬೂರು ಜಯತೀರ್ಥ |
| ಕಲೆ : | ಚಂದ್ರನಾಥ್, ಕೆ. ಟಿ. ಅನಂತ್, ಎಂ.ಸಿ. ಆನಂದ್ |
| ಪ್ರಸಾಧನ : | ರಾಮಕೃಷ್ಣ |
| ನಿರ್ದೇಶನ : | ಎಚ್. ವಿ. ವೆಂಕಟಸುಬ್ಬಯ್ಯ |
| ನಿರ್ವಹಣೆ : | ಜೆ. ಲೋಕೇಶ್, ಎಚ್.ಕೆ. ನಾಗೇಶರಾವ್ |

## ಕೃತಜ್ಞತೆಗಳು

ನಮ್ಮೆಲ್ಲ ಜಾಹಿರಾತುದಾರರಿಗೆ, ಪ್ರಭಾತ್ ಶಿಶುವಿಹಾರ,
ಡಿ. ಆರ್. ಸಂಪತ್, ವರದೇಶಿಕಾಚಾರ್,
ಯು. ಎಸ್. ಶ್ರೀನಿವಾಸ್, ಟಿ. ಎನ್ ರಾಜಲಕ್ಷ್ಮಿ,
ಲಿಪಿ ಮುದ್ರಣ, ಸೇವಾ ಸದನ, ಮಲ್ಲೇಶ್ವರಂ,
ವಿ. ಗುಂಡೂರಾವ್, ಬಿ. ವಿ. ವೈಕುಂಠರಾಜು
ಜಿ. ಎನ್. ರಂಗನಾಥರಾವ್, ಆರ್. ನಾಗೇಶ್,
ಎಂ. ಎಸ್. ಕೆ. ಪ್ರಭು,
ಯುವಜನ ಇಲಾಖೆ (ಕರ್ನಾಟಕ ಸರಕಾರ)

## ಕರ್ನಾಟಕದಲ್ಲಿ ತುರ್ತುಪರಿಸ್ಥಿತಿಯ ಸಾಧನೆ

* 116 ಕೋಟಿ ರೂ. ಗ್ರಾಮೀಣ ಸಾಲದಿಂದ 1 ಕೋಟಿ ಜನರ ವಿಮೋಚನೆ.
* ಕೃಷಿ ಕೂಲಿ ಶೇ. 30ರಷ್ಟು ಹೆಚ್ಚಿಸಿದ್ದರಿಂದ 27 ಲಕ್ಷ ಕೂಲಿಗಾರರಿಗೆ ಲಾಭ.
* 5 ಲಕ್ಷ ಗೇಣಿದಾರರು ಇಂದು 20 ಲಕ್ಷ ಎಕರೆ ಭೂ ಮಾಲೀಕರು.
* ಇದುವರೆಗೆ 17000 ಹಳ್ಳಿಗಳಿಗೆ ಹಾಗೂ 20000 ನೀರಾವರಿ ಪಂಪು ಸೆಟ್ಟುಗಳಿಗೆ ವಿದ್ಯುಚ್ಛಕ್ತಿ ಸೌಲಭ್ಯ.
* ಗ್ರಾಮೀಣ ಜನರಿಗೆ 6.7 ಲಕ್ಷ ನಿವೇಶನಗಳ ಉಚಿತ ಹಂಚಿಕೆ ಇದರಲ್ಲಿ 3 ಲಕ್ಷ ನಿವೇಶನ ಅನುಸೂಚಿತ ಜಾತಿ ಮತ್ತು ಪಂಗಡಗಳಿಗೆ ಮೀಸಲು.
* ರಾಜ್ಯದಲ್ಲಿ 92000 ಜನರಿಗೆ ವೃದ್ಧಾಪ್ಯ ವೇತನ.
* ವೃತ್ತಿಮೂಲ ಅಲ್ಪಾವಧಿ ತರಬೇತಿಯಿಂದ 1000 ತರಬೇತಿ ಹಾಗೂ ಸ್ಟೈಪೆಂಡ್ ನೀಡಿಕೆ.
* ತೀವ್ರ ಕ್ರಮಗಳಿಂದ ಅಹಾರ ಪದಾರ್ಥ ಹಾಗೂ ಅವಶ್ಯಕ ವಸ್ತುಗಳ ಬೆಲೆಗಳಲ್ಲಿ ಶೇ. 20 ರಿಂದ 40 ರಷ್ಟು ಇಳಿತ.
* ವಿದ್ಯಾರ್ಥಿಗಳಿಗೆ ಕಡಿಮೆ ದರದಲ್ಲಿ ಪಠ್ಯ ಪುಸ್ತಕ, ನೋಟು ಪುಸ್ತಕಗಳ ಸರಬರಾಜು ಹಾಸ್ಟೆಲುಗಳಿಗೆ ಕ್ರಮಬದ್ಧವಾಗಿ ಅಗತ್ಯ ವಸ್ತುಗಳ ಹಂಚಿಕೆ.
* ಕೈಮಗ್ಗ ಅಭಿವೃದ್ಧಿ ಕಾರ್ಪೊರೇಶನ್ ಸ್ಥಾಪನೆ ಹಾಗೂ ಕೈಮಗ್ಗ ಅಭಿವೃದ್ಧಿಗೆ ಈ ವರ್ಷದಲ್ಲಿ 92 ಲಕ್ಷ ರೂ. ವೆಚ್ಚ.

ಕರ್ನಾಟಕ ಸರಕಾರದ, ವಾರ್ತಾ ಮತ್ತು ಪ್ರಚಾರ ಇಲಾಖೆಯಿಂದ ಪ್ರಕಟಿತ.

